ಅನತೋಲಿ ಮಿತ್ಯಾಯೆವ್

# ಗ್ರೀಷ್ಕ ಹಾಗೂ ಖಗೋಳಯಾತ್ರಿ



ರಾದುಗ ಪ್ರಕಾಶನ
ಮಾಸ್ಕೋ

ಅನತೋಲಿ ಮಿತ್ಯಾಯೆವ್

# ಗ್ರೀಷ್ಮ ಹಾಗೂ ಖಗೋಳಯಾತ್ರಿ

ಚಿತ್ರಗಳು:
ಯೂರಿ
ಮೊಲೊಕಾನೊವ್
ಅನುವಾದ:
ಕೆ. ಎಲ್. ಗೋಪಾಲಕೃಷ್ಣರಾವ್



ರಾದುಗ ಪ್ರಕಾಶನ
ಮಾಸ್ಕೋ



# ಗ್ರೀಷ್ಕ ಹಾಗೂ ಖಗೋಳಯಾತ್ರಿ

ಈ ಭೂಮಂಡಲದ ಮೇಲೆ ಒಂದು ರಾಜ್ಯವಿದೆ. ಆ ರಾಜ್ಯದಲ್ಲಿ ಒಂದು ಊರಿದೆ. ಆ ಊರಿನಲ್ಲಿ ಒಬ್ಬ ಹುಡುಗ. ಅವನ ಹೆಸರು ಗ್ರೀಷ್ಕ. ತುಂಬ ತುಂಟ. ಜಗಳಗಂಟ. ಅವನಂಥ ಕೆಟ್ಟೋರು ಇಡೀ ಭೂಮಂಡಲದ ಮೇಲೆ ಇನ್ನೊಬ್ಬರಿರಲಿಲ್ಲ. ಅವನು ಹಿರಿಯರ ಮಾತು ಕೇಳುತ್ತಿರಲಿಲ್ಲ, ಕಿರಿಯರನ್ನು ಪೀಡಿಸುತ್ತಿದ್ದ. ಅದಕ್ಕೇ ಅವನನ್ನು ಯಾರೂ ಮುದ್ದಾಗಿ ಗ್ರೀಷ ಅಥವಾ ಗ್ರೀಷೂತ್ಕ ಅಂತ ಕರೆಯುತ್ತಿರಲಿಲ್ಲ. ಗಡುಸಾಗಿ ಗ್ರೀಷ್ಕ ಅಂತ ಕರೆಯುತ್ತಿದ್ದರು....

ಒಂದು ದಿನ ಗ್ರೀಷ್ಕ ಅಂಗಳಕ್ಕೆ ಹೋದ. ನೋಡುತಾನೆ – ಪುಟ್ಟ ಹುಡುಗಿ ಮರೀನಚ್ಕ ಮೂರು ಚಕ್ರದ ಸೈಕಲ್ ಮೇಲೆ ಸಂತೋಷದಿಂದ ಆಡುತ್ತಿದಾಳೆ. ಗ್ರೀಷ್ಕ ಅವಳನ್ನು ಸೈಕಲ್‌ನಿಂದ ಹೊರಕ್ಕೆ ದಬ್ಬಿದ, ತಾನೇ ಅದರ ಮೇಲೆ ಕೂತು ಬೀದಿಯಲ್ಲಿದ್ದ ಕೊಚ್ಚೆ ಗುಂಡಿಗಳಲ್ಲಿ ಸೈಕಲ್ಲನ್ನು ಬಿಟ್ಟುಕೊಂಡು ಹೋದ. ಮಳೆ ಆದೇ ತಾನೆ ಬಂದು ನಿಂತಿತ್ತು. ಸುತ್ತಮುತ್ತ ಎಲ್ಲ ತುಂಬ ನೀರು ನಿಂತಿತ್ತು. ಎಲ್ಲ ಕಡೆಯೂ ಗ್ರೀಷ್ಕ ಸೈಕಲ್ ಬಿಟ್ಟುಕೊಂಡು ಹೋದ. ಅವನು ಹೋದಾಗಲೆಲ್ಲ ಕೊಚ್ಚೆ ಆ ಕಡೆ ಈ ಕಡೆ ಹಾರುತ್ತಿತ್ತು. ಅವನಿಗೆ ಆನಂದವೋ ಆನಂದ. ಹಾಡು ಹಾಡತೊಡಗಿದ:

ಗ್ರೀಷ್ಕ ಕೊಡುತಾನೆ ಗುದ್ದು,
ತಕ್ಷಣವೇ ಆಗುತ್ತೆ ಊದು !
ತಕ್ಷಣವೇ ಆಗುತ್ತೆ ಊದು,
ಗ್ರೀಷ್ಕ ಕೊಡುತಾನೆ ಗುದ್ದು !



ಹೀಗೆ ಅವನು ಸೈಕಲ್ಲನ್ನು ಹಿಂದಕ್ಕೂ ಮುಂದಕ್ಕೂ ಬಿಟ್ಟುಕೊಂಡು ಹೋಗುತ್ತ, ಕೊನೆ ಮೊದಲಿಲ್ಲದಂತೆ ಹಾಡುತ್ತಿದ್ದ. ಕೊನೆಗೆ ಸೈಕಲ್ ತುಳಿದು ಹಾಡು ಹಾಡಿ ಸುಸ್ತಾದ ಮೇಲೆ ಸೈಕಲ್ಲನ್ನು ಒಂದು ಕೊಚ್ಚೆ ಗುಂಡಿ ಮಧ್ಯದಲ್ಲಿ ಬಿಟ್ಟು ಹೊರ ಬಂದ. ಅವನಿಗೇನು ಆಗಬೇಕಾಗಿದೆ, ತುಂಟ ಹುಡುಗ! ಅವನು ರಬ್ಬರ್ ಬೂಟು ಹಾಕಿಕೊಂಡಿದ್ದ. ಕೊಚ್ಚೆಯಲ್ಲಿ ನಡೆದುಕೊಂಡು ಒಣಗಿದ್ದ ಜಾಗದಲ್ಲಿ ಬಂದು ನಿಂತ. ಮರೀನಚ್ಕ ಸಾಮಾನ್ಯ ಷೂ ಹಾಕಿಕೊಂಡಿದ್ದಳು. ಅವಳು ಕೊಚ್ಚೆಯಲ್ಲಿ ನಡೆದುಕೊಂಡು ಹೋಗಿ ಸೈಕಲ್ಲನ್ನು ಹೇಗೆ ತೆಗೆದುಕೊಳ್ಳುವಳು ಅನ್ನುವುದನ್ನು ತುಂಟತನದಿಂದ ನೋಡುತ್ತ ನಿಂತ.

ಮರೀನಚ್ಕಳಿಗೆ ತನ್ನ ಷೂ ಕೊಳೆ ಮಾಡಿಕೊಳ್ಳುವುದು ಇಷ್ಟವಿರಲಿಲ್ಲ. ಆದ್ದರಿಂದ ಅವಳು ಮೊದಲು ಒಂದು ಇಟ್ಟಿಗೆ ತಂದಳು. ಆಮೇಲೆ ಒಂದು ಹಲಗೆ ತಂದಳು. ಅವುಗಳಿಂದ ಒಂದು ಸೇತುವೆ ಮಾಡುವುದು ಅವಳ ಉದ್ದೇಶ. ಆದರೆ ಅವಳು ಸೇತುವೆ ಮಾಡಿ ಮುಗಿಸಿದಳೋ ಇಲ್ಲವೋ ಕೂಡಲೇ ಗ್ರೀಷ್ಕ ಸೈಕಲ್ಲನ್ನು ಇನ್ನೊಂದು ಕೊಚ್ಚೆ ಗುಂಡಿಗೆ ತಳ್ಳಿದ.

ಮರೀನಚ್ಕಳಿಗೆ ದುಃಖ ಒತ್ತರಿಸಿ ಬಂತು. ಅಳತೊಡಗಿದಳು. ಗ್ರೀಷ್ಕನಾದರೋ ಗಹಗಹಿಸಿ ನಗುತ್ತಿದ್ದ. ಆ ಹೊತ್ತಿಗೆ ಸರಿಯಾಗಿ ಪಕ್ಕದ ಮನೆಯಲ್ಲಿ ವಾಸವಾಗಿದ್ದ ವಾನ್ಯ ಹೊರ ಬಂದ. ಅವನು ಗ್ರೀಷ್ಕನ ಕುತ್ತಿಗೆ ಹಿಡಿದು ಹೇಳಿದ:

"ನೋಡು, ಈ ಕ್ಷಣವೇ ಆ ಸೈಕಲ್ಲನ್ನು ಇಲ್ಲಿಗೆ ತಂದಿಡು! ಓಡಿ ಹೋಗುವ ಯೋಚನೆ ಮಾಡಬೇಡ ನಾನು ನಿನ್ನನ್ನು ಹಿಡಿಯಬಲ್ಲೆ. ಆಮೇಲೆ ಚೆನ್ನಾಗಿ ಪಾಠ ಕಲಿಸ್ತೀನಿ."

ವಾನ್ಯ ಗ್ರೀಷ್ಕಗಿಂತ ಹೆಚ್ಚು ಎತ್ತರವೇನೂ ಆಗಿರಲಿಲ್ಲ, ಅವನಿಗಿಂತ ಹೆಚ್ಚು ದೊಡ್ಡವನೂ ಆಗಿರಲಿಲ್ಲ ಆದರೂ ಗ್ರೀಷ್ಕಗೆ ಹೆದರಿಕೆಯಾಯಿತು. ಹೆಚ್ಚು ಮಾತಿಲ್ಲದೆ ಕೊಚ್ಚೆ ಗುಂಡಿಯೊಳಕ್ಕೆ ನಡೆದು ಹೋದ.

ಸೈಕಲ್ಲನ್ನು ಮರೀನಚ್ಕಳಿಗೆ ತಂದುಕೊಡುತ್ತಿದ್ದಾಗ ಸುತ್ತಮುತ್ತ ಹುಡುಗಿಯರೆಲ್ಲ ಜಮಾಯಿಸಿ ಈ ವಿಚಿತ್ರ ದೃಶ್ಯವನ್ನು ನೋಡುತ್ತ ನಿಂತರು. ಅವರ ಸಂಖ್ಯೆ ಕಮ್ಮಿ ಏನೂ ಇರಲಿಲ್ಲ – ಇಪ್ಪತ್ತು ಹುಡುಗಿಯರು. ತುಂಟ ಹುಡುಗನಿಗೆ ತಕ್ಕ ಶಾಸ್ತಿಯಾದುದನ್ನು ಕಂಡು ಅವರೆಲ್ಲ ಗಟ್ಟಿಯಾಗಿ ನಗತೊಡಗಿದರು. ನಾಲಿಗೆ ಮುಂದೆ ಮಾಡಿ ಮುಖ ಸೊಟ್ಟಗೆ ಮಾಡಿ ಅವರೆಲ್ಲ ಅವನನ್ನು ಅಣಕಿಸಿದರು.

ಗ್ರೀಷ್ಕಗೆ ಎಷ್ಟು ಅವಮಾನವಾಯಿತೆಂದರೆ ಅಟ್ಟದ ಮೇಲೆ ಓಡಿ ಹೋಗಿ ಅಲ್ಲೇ ತುಂಬ ಹೊತ್ತು ಕುಳಿತಿದ್ದ. ಮರೀನಚ್ಕಳಿಗೆ ಸಹಾಯ ಮಾಡಲು ಬಂದವನ ಮೇಲೆ ಹೇಗೆ ಸೇಡು ತೀರಿಸಿಕೊಳ್ಳಬೇಕು ಅಂತಲೇ ತುಂಬ ಹೊತ್ತು ಯೋಚಿಸುತ್ತಿದ್ದ.

"ಅವನಿಗೆ ಎಂಥ ತೊಡರು ಕೊಡುತ್ತೀನಿ ಅಂದರೆ ಅವನು ಆ ಕೊಚ್ಚೆ ಗುಂಡಿಯಲ್ಲಿ ಮಗುಚಿ ಬೀಳ ಬೇಕು. ಅದರಿಂದ ಹಾರಿದ ಕೊಚ್ಚೆ ಈ ಮನೆಗೂ ಮೇಲೆ ಎತ್ತರಕ್ಕೆ ಹಾರಬೇಕು !"

"ಇಲ್ಲದಿದ್ದರೆ ಅವನು ಲಿಫ್ಟ್‌ನಲ್ಲಿ ಹೋಗುತ್ತಿದ್ದಾಗ ಏನಾದರೂ ಮಾಡಿ ಅದನ್ನು ಕೆಡಿಸಿ ಬಿಡ್ತೀನಿ. ಅವನು ಒಂದು ಇಡೀ ವಾರ ಲಿಫ್ಟ್‌ನಲ್ಲೇ ಕೊಳೆಯುವಂತಾಗಬೇಕು."

"ಅಥವಾ ಇನ್ನೂ ಹೆಚ್ಚು ಉತ್ತಮವಾದುದೆಂದರೆ – ಅವನ ಮೇಲೆ ಹೋಗಿ ಬೀಳು ಅಂತ ನೆರೆ ಮನೆ ಯವನ ದೊಡ್ಡ ನಾಯಿಯನ್ನು ಛೂ ಬಿಡ್ತೀನಿ. ಅಪರಾಧಿಗಳನ್ನು ಹಿಡೀತವಲ್ಲ ಹಾಗೆ – ನೆಲಕ್ಕೆ ಬೀಳಿಸಿ ತನ್ನ ಮುಂದಿನ ಪಂಜಾಗಳಿಂದ ಅವನನ್ನು ಅದುಮಿ ಹಿಡಿದಿರಬೇಕು...."

ಹೀಗೆ ಅವನು ಯೋಚಿಸಿದ ಒಂದೊಂದು ಸೇಡಿನ ಕ್ರಿಯೆಯೂ ಅದರ ಹಿಂದಿನದಕ್ಕಿಂತ ಹೆಚ್ಚು ಭಯಂಕರ ವಾಗಿತ್ತು. ಆದರೆ ತಾನು ಅಂದುಕೊಂಡ ಈ ಎಲ್ಲ ಸಾಹಸಗಳನ್ನೂ ತಾನು ಎಂದಿಗೂ ಮಾಡಲಾಗುವುದಿಲ್ಲ ಅನ್ನುವುದನ್ನು ಅವನು ಕೂಡಲೇ ಅರಿತುಕೊಂಡ. ನೆರೆ ಮನೆಯವನ ನಾಯಿಗೆ ತಾನು ಒಂದು ಚೂರು ಸಾಸಿಜ್ ಕೊಟ್ಟರೂ ಅದು ತನ್ನ ಮಾತು ಕೇಳುತ್ತದೆ ಅಂತ ಯಾವ ಖಾತರಿ? ಲಿಫ್ಟ್ ಕೆಡಿಸಿ ಬಿಟ್ಟರೆ ಬೇರೆ ಯಾರಿಗಿಂತ ಹೆಚ್ಚಾಗಿ ತನಗೇ ಹೆಚ್ಚು ಕೆಡುಕು, ಯಾಕೆಂದರೆ, ತಾನು ವಾಸಿಸುತ್ತಿರುವುದು ಮೇಲಿನ ಅಂತಸ್ತಿನಲ್ಲಿ. ತೊಡರು ಕೊಟ್ಟು ವಾನ್ಯನನ್ನು ಕೊಚ್ಚೆ ಗುಂಡಿಯಲ್ಲೇನೋ ಬೀಳಿಸಬಹುದು, ಆದರೆ ತಾನೇ ಆ ಗುಂಡಿಯಲ್ಲಿ ಬಿದ್ದು ಈಜುವಂತಾಗುವುದೇ ಹೆಚ್ಚಿನ ಸಂಭವವಾಗಿತ್ತು. ಯಾಕೆಂದರೆ ಅವನ ಶತ್ರು ಅವನಿಗಿಂತ ಹೆಚ್ಚು ಚುರುಕಾ ಗಿದ್ದ. ಆದರೆ ತಾನು, ಗ್ರೀಷ್ಕ, ಸ್ವಲ್ಪ ಹೆಚ್ಚು ಬಲಶಾಲಿಯಾಗಿದ್ದರೆ ಪರಿಸ್ಥಿತಿ ಬೇರೆಯೇ ಆಗುತ್ತಿತ್ತು ! ಆಗ ಅವನು ನಿಜಕ್ಕೂ ಏನಾದರೂ ಮಾಡಲು ಸಾಧ್ಯವಿರುತ್ತಿತ್ತು !...



# ಗ್ರೀಷ್ಕ ಖಗೋಳಯಾತ್ರಿಯ ಬಳಿಗೆ ಹೋಗುತ್ತಾನೆ

ಅದೇ ಊರಿನಲ್ಲಿ, ಗ್ರೀಷ್ಕ ವಾಸಿಸುತ್ತಿದ್ದ ಅದೇ ಬೀದಿಯಲ್ಲೇ, ಒಬ್ಬ ಖಗೋಳಯಾತ್ರಿಯೂ ವಾಸಿಸುತ್ತಿದ್ದ. ಎಲ್ಲ ಖಗೋಳಯಾತ್ರಿಗಳಂತೆ ಅವನೂ ಕರುಣಾಳುವಾಗಿದ್ದ. ಯಾರೇ ಆಗಲಿ ಸಹಾಯ ಅಥವಾ ಹಿತವಚನ ಕೇಳಿದ ಕೂಡಲೇ ನೀಡುತ್ತಿದ್ದ. ಊರಿನ ಹುಡುಗರು ಅವನ ಬಳಿಗೆ ಅವನು ಹೇಳುತ್ತಿದ್ದ ಕಥೆಗಳನ್ನು ಕೇಳಲೆಂದೋ, ಅವನು ನೀಡುತ್ತಿದ್ದ ಟೀ ಹಾಗೂ ಕೇಕು ತಿನ್ನಲೆಂದೋ, ಅವನೊಂದಿಗೆ ಆಟವಾಡಲೆಂದೋ, ಆಗಾಗ್ಗೆ ಹೋಗುತ್ತಿದ್ದರು. ಹಾಸಿಗೆ ಮೇಲೆ ಮಲಗಿದ ಕೂಡಲೇ ನಿದ್ದೆ ಹೋಗುವುದು ಹೇಗೆ ಅನ್ನುವುದನ್ನೂ ಅವನು ಅವರಿಗೆ ಹೇಳಿಕೊಡುತ್ತಿದ್ದ. ಇದೇನೂ ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಕೆಲವು ಹುಡುಗರಂತೂ ತುಂಬ ಹೊತ್ತು ಹಾಸಿಗೆಯ ಮೇಲೆ ಹೊರಳಾಡುತ್ತ ಗೋಳಾಡುತ್ತಲಿದ್ದು ಅನಂತರವಷ್ಟೆ ನಿದ್ರೆ ಹೋಗುತ್ತಿದ್ದರು. ಇನ್ನು ಕೆಲವರಿಗೆ ಕಥೆ ಕೇಳದೆ ನಿದ್ರೆಯೇ ಬರುತ್ತಿರಲಿಲ್ಲ. ಆದರೆ ಖಗೋಳಯಾತ್ರಿಯ ವಿಷಯ ಹಾಗಲ್ಲ. ಅಂತರಿಕ್ಷ ನೌಕೆಯಲ್ಲಿರುವ ಅವನಿಗೆ ಭೂಮಿಯಿಂದ ನಿದ್ರೆ ಹೋಗೆಂದು ಆಜ್ಞೆ ಬಂದ ಕೂಡಲೇ ಅವನು ನಿದ್ರೆ ಹೋಗುತ್ತಾನೆ. ಅದು ಹೇಗೆಂಬುದನ್ನೇ ಖಗೋಳಯಾತ್ರಿ ಹುಡುಗರಿಗೆ ಹೇಳಿಕೊಡುತ್ತಿದ್ದುದು.

"ಈ ಖಗೋಳಯಾತ್ರಿಯೇ ಸರಿ. ಇವನು ಏನೆಲ್ಲವನ್ನೂ ಮಾಡಬಲ್ಲ" ಗ್ರೀಷ್ಕ ಅಟ್ಟದ ಮೇಲೆ ಕುಳಿತು ತನ್ನಲ್ಲೇ ಹೇಳಿಕೊಂಡ. "ಅವನು ನನ್ನನ್ನು ಬಹುಶಃ ತುಂಬ ಬಲಶಾಲಿಯನ್ನಾಗಿ ಮಾಡಬಹುದು. ಅವನ ಬಳಿಗೆ ಹೋಗಿ ನೋಡುವುದೇ ಒಳ್ಳೆಯದು ಅನಿಸುತ್ತೆ..."

ಹಾಗೆಂದುಕೊಂಡು ಗ್ರೀಷ್ಕ ಖಗೋಳಯಾತ್ರಿಯನ್ನು ಕಾಣಲು ಹೋದ. ಖಗೋಳಯಾತ್ರಿ ಅವನನ್ನು ತನ್ನ ಕಾರ್ಯಾಲಯಕ್ಕೆ ಕರೆದೊಯ್ದು ಕುರ್ಚಿ ಕೊಟ್ಟು ಕುಳಿತುಕೊಳ್ಳಲು ಹೇಳಿ ಕೇಳಿದ:

"ಏನಪ್ಪ ಗ್ರಿಗೋರಿ, ಏನು ಬಂದೆ? ಟೀ ಕುಡೀತೀಯಾ? ನನ್ನ ಮೆಡಲುಗಳನ್ನೆಲ್ಲ ನೋಡಬೇಕೆ, ಮುಟ್ಟಿ ನೋಡಬೇಕೆ? ಸರಿ, ಇಲ್ಲಿವೆ ನೋಡು ಈ ನನ್ನ ಮೇಜಿನ ಡ್ರಾಯರ್‌ನಲ್ಲಿ ನನ್ನ ಮೆಡಲುಗಳು. ನೋಡುತ್ತಿರು. ನಾನು ಟೀಗೆ ನೀರು ಇಟ್ಟು ಬರುತ್ತೇನೆ. ಅಥವಾ ಇನ್ನೇನಾದರೂ ಕೇಳುವುದಿದೆಯೆ?"

ಗ್ರೀಷ್ಕ ಎಲ್ಲ ಮೆಡಲುಗಳನ್ನೂ ಕಂಡ. ಮುಟ್ಟಿ ನೋಡಿದ. ಹೆಮ್ ಎಂದ. ಚಡಪಡಿಸಿದ.

"ನಾನು ಇನ್ನೇನೋ ಕೇಳಬೇಕೂಂತಿದೀನಿ" ಗ್ರೀಷ್ಕ ಮಣಗುಟ್ಟಿದ. ಧೈರ್ಯ ತಂದುಕೊಂಡ. "ನೀವು ಯಾವುದೇ ಕೆಲಸ ಮಾಡಬಲ್ಲಿರಿ ಅಂತ ಹೇಳ್ತಾರೆ, ನಿಜವೇ?"

"ನಿಜ" ಖಗೋಳಯಾತ್ರಿ ಉತ್ತರಿಸಿದ. ಗ್ರೀಷ್ಕನಿಗೆ ತುಂಬ ಸಂತೋಷವಾಯಿತು.

"ಹಾಗಾದರೆ ನನ್ನನ್ನು ಬಲಶಾಲಿಯನ್ನಾಗಿ ಮಾಡುವಿರಾ!" ಅವನೆಂದ. "ಎಷ್ಟು ಬಲಶಾಲಿ ಅಂದರೆ... ಭಯಂಕರವೆನ್ನುವಷ್ಟು!"

"ಆಗಲಿ. ನಾನು ನಿನಗೆ ಸಹಾಯ ಮಾಡುತ್ತೇನೆ" ಖಗೋಳಯಾತ್ರಿ ಒಪ್ಪಿಕೊಂಡ. "ಆದರೆ, ಹೇಳು ಯಾಕೆ ನೀನು ಅಷ್ಟು ಭಯಂಕರವೆನ್ನುವಷ್ಟು ಬಲಶಾಲಿಯಾಗಬೇಕು?"

ಈ ಪ್ರಶ್ನೆ ಕೇಳಿ ಗ್ರೀಷ್ಕ ಹೆದರಿದ. ಬೆನ್ನುದ್ದ ಕಂಪನವಾಯಿತು. ಆದರೆ ಏನು ಮಾಡುವುದು. ನಿಜ ಹೇಳಲೇ ಬೇಕು.

"ಯಾಕೆಂದರೆ ನಾನು ವಾಸ್ಯನನ್ನು ಬಡಿಯಬೇಕು. ಅವನು ಹುಡುಗಿಯರ ಮುಂದೆಲ್ಲ ನನ್ನನ್ನು ಮೂರ್ಖನಾಗುವಂತೆ ಮಾಡಿದ. ಅವರೆಲ್ಲ ನಗುತ್ತ ನನ್ನನ್ನು ಕೋತಿಯಂತೆ ಅಣಕಿಸಿದರು."

# ಗ್ರೀಷ್ಮ ಭೂಮಿಯಿಂದ ಯಾನ ಹೊರಡುತ್ತಾನೆ

ಗ್ರೀಷ್ಮಗೆ ಎಷ್ಟು ಸಂತೋಷವಾಯಿತೆಂದರೆ ಅವನಿಗೆ ಅದನ್ನು ನಂಬಲೂ ಆಗಲಿಲ್ಲ. ಕಾಸ್ಮೊಡ್ರೋಮ್‌ಗೆ ಓಡಿದ. ಖಗೋಳಯಾತ್ರಿ ಎಲ್ಲಿ ಮನಸ್ಸು ಬದಲಿಸಿ ಪಾಸ್‌ಅನ್ನು ಹಿಂತೆಗೆದುಕೊಂಡು ಬಿಡುತ್ತಾನೋ ಎಂದು, ತುಂಟನಾಗಿರುವುದಕ್ಕಾಗಿ ತನ್ನನ್ನು ಚೆನ್ನಾಗಿ ಬಯ್ಯಬಹುದೆಂದು, ಅವನಿಗೆ ಇಡೀ ಕಾಲ ಹೆದರಿಕೆ. ಆದರೆ ಹಾಗೇನೂ ಆಗಲಿಲ್ಲ. ದಾರಿಯಲ್ಲಿ ಯಾರೂ ಗ್ರೀಷ್ಮನನ್ನು ತಡೆಯಲಿಲ್ಲ. ಉಡ್ಡಯನ ಸ್ಥಳದಲ್ಲಿದ್ದ ತಂತ್ರಜ್ಞರೂ ಗ್ರೀಷ್ಮನನ್ನು ಕರುಣೆಯಿಂದಲೇ ಕಂಡರು, ಗೌರವದಿಂದ ಬರಮಾಡಿಕೊಂಡರು. ಅಂತರಿಕ್ಷ ಉಡುಪು ತೊಡಲು, ನೌಕೆಯೊಳಕ್ಕೆ ಹೋಗಿ ಕುಳಿತುಕೊಳ್ಳಲು ಅವನಿಗೆ ನೆರವಾದರು. ಮತ್ತು ಯಾವತ್ತಿನಂತೆ ಯಾನ ಮುಗಿಸಿಕೊಂಡು ಸುಖವಾಗಿ ಹಿಂದಿರುಗುವಂತ, ಮೃದುವಾಗಿ ಭೂಮಿಗೆ ಬಂದಿಳಿಯುವಂತೆ ಕೋರಿದರು.

ಎಂಜಿನ್‌ಗಳ ಸ್ವಿಚ್ ಹಾಕಲಾಯಿತು. ರಾಕೆಟ್ಟು ಕಾಂಕ್ರೀಟ್ ವೇದಿಕೆಯಿಂದ ಕಿತ್ತು ಹೊರ ಬಂದು ಭೂಮಿಯಿಂದ ಮೇಲಕ್ಕೆ ಹಾರತೊಡಗಿತು. ತೆರಪುಗಂಡಿ ಗಾಜಿನ ಮೂಲಕ ಗ್ರೀಷ್ಮ ಪೊಪ್ಲಾರ್ ಮರಗಳ ಮೇಲುಭಾಗಗಳನ್ನು ಕಂಡ. ಅವುಗಳಲ್ಲಿದ್ದ ಕಾಗೆಗೂಡುಗಳೂ ಮಿಂಚಿನಂತೆ ಸುಳಿದು ಹೋದವು. "ಮೊದಲ ಅಂತಸ್ತು ಹೋಯಿತು" ಗ್ರೀಷ್ಮ ತನಗೇ ಹೇಳಿಕೊಂಡ.

ಆಕಾಶದ ಎರಡನೆಯ ಅಂತಸ್ತು ತಲುಪಿದಾಗ ಅಂತರಿಕ್ಷ ನೌಕೆ ಹಕ್ಕಿಗಳ ಸಮೂಹವೊಂದನ್ನು ದಾಟಿ ಹೋಯಿತು. ಈ ಹಕ್ಕಿಗಳು ತುಂಬ ಎತ್ತರದಲ್ಲಿ ವೇಗವಾಗಿ ಹಾರುತ್ತಿದ್ದವು. ಆದರೆ ಅಂತರಿಕ್ಷ ನೌಕೆಗಳು ಅವಕ್ಕೂ ಹೆಚ್ಚು ಎತ್ತರ, ಹೆಚ್ಚು ವೇಗವಾಗಿ ಹಾರುತ್ತವೆ. ಹಾಗಾಗಿ ಹಕ್ಕಿಗಳು ಬೇಗನೆಯೇ ಹಿಂದೆ ಬಿದ್ದವು.

ಆಕಾಶದ ಮೂರನೆಯ ಅಂತಸ್ತಿನಲ್ಲಿ ನೀಲ ಮುಗಿಲು ತುಂಬಿತ್ತು. ಸುತ್ತ ಮಳೆ ಬೀಳುತ್ತಿತ್ತು, ಆದರೆ ಹೆಚ್ಚು ಕಾಲವಿಲ್ಲ – ರಾಕೆಟ್ಟು ಮಳೆಗೂ ಮೇಲೆ ಏರಿ ಹೋಯಿತು. ಬೇಗನೆಯೇ ಮಂಜಿನ ಚಕ್ಕೆಗಳು ತೆರಪುಗಂಡಿಯ ಗಾಜಿನ ಸುತ್ತ ಸುಳಿ ಸುತ್ತುತ್ತಿದ್ದವು. ನಿಜವಾದ ಹಿಮಪಾತ ! ಓಹೋ, ಇದು ಹೀಗೋ ! ಮಳೆ ಮಂಜಿನಿಂದ ಶುರುವಾಗುತ್ತೆ. ಮೋಡಗಳ ಕೆಳಗೆ ನೀರು ಗಡ್ಡೆಕಟ್ಟುವಷ್ಟು ತಣ್ಣಗಿರುತ್ತೆ. ಭೂಮಿಯ ಬೆಚ್ಚಗಿನ ವಾಯುಮಂಡಲ ಪ್ರವೇಶಿಸಿದಾಗಲಷ್ಟೆ ಈ ಮಂಜಿನ ಹರಳುಗಳು ಕರಗಿ ನೀರಿನ ಹನಿಗಳಾಗಿ ಬೀಳುತ್ತವೆ.

ರಾಕೆಟ್ಟು ಮೋಡವೊಂದರ ಮಧ್ಯ ಭಾಗದಲ್ಲಿದ್ದಾಗ ಉಜ್ವಲವಾದ ನೀಲಿ ಬೆಳಕೊಂದು ಕಾಣಿಸಿಕೊಂಡು ಅಂತರಿಕ್ಷ ನೌಕೆಯ ಕ್ಯಾಬಿನ್ನನ್ನು ಬೆಳಗಿತು. ಅದು ಅನತಿದೂರದಲ್ಲಿ ಮೂಡಿದ್ದ ಮಿಂಚಾಗಿತ್ತು. ಆದರೆ ಗ್ರೀಷ್ಮನಿಗೆ ಗುಡುಗಿನ ಶಬ್ದ ಕೇಳಿಸಲಿಲ್ಲ – ರಾಕೆಟ್ಟಿನ ಎಂಜಿನ್‌ಗಳು ಗುಡುಗಿಗಿಂತ ಹೆಚ್ಚು ಜೋರಾಗಿ ಭೋರ್ಗರೆಯುತ್ತಿದ್ದವು !

ಆಮೇಲೆ ಮೋಡವೂ ಹಿಂದುಳಿಯಿತು. ಅದು ಭೂಮಿಯ ಮೇಲೆ ಬಿಳಿ ತುಪ್ಪುಳದ ಪಟ್ಟಿಯಂತೆ ತೂಗಿ ನಿಂತಿದ್ದಿತು. ಅದು ಚಳಿಗಾಲದಲ್ಲಿ ಮಂಜುಗುಡ್ಡೆಗಳಿಂದ ಆವೃತವಾದ ಮೈದಾನದಂತೆಯೂ ಕಂಡು ಬಂದಿತು. ಆ ಬಿಳಿ ಗುಡ್ಡದ ಹಿಂಬದಿಯಿಂದ ಇನ್ನೊಂದೋ ಎರಡೋ ಕ್ಷಣದಲ್ಲಿ ಸ್ಕೀ ಆಟಗಾರರ ತಂಡ ಕಾಣಿಸಿಕೊಳ್ಳುವುದೆಂದೇ ಗ್ರೀಷ್ಮನಿಗೆ ಅನ್ನಿಸಿತು. ಅಥವಾ ಕುದುರೆಯಿಂದ ಎಳೆಯಲ್ಪಟ್ಟ ಜಾರುಬಂಡಿಯೂ ಕಾಣಿಸಿಕೊಳ್ಳಬಹುದು...

ಆದರೆ ಅಂಥದೇನೂ ಆಗುವುದು ಸಾಧ್ಯವಿರಲಿಲ್ಲವೆನ್ನಿ. ಆಮೇಲೆ ಆಕಾಶದ ನಾಲ್ಕನೆಯ ಅಂತಸ್ತಿನಲ್ಲಿ, ಮೋಡಗಳಿಗೂ ಮೇಲೆ, ಒಂದು ದೊಡ್ಡ ಜೆಟ್ ವಿಮಾನ ಹಾರಿ ಹೋಗುತ್ತಿತ್ತು. ಗ್ರೀಷ್ಮ ಕೈ ಆಡಿಸಿ ಅದಕ್ಕೆ

ಶುಭಾಶಯ ತಿಳಿಸಿದ. ಅನಂತರ ಈ ವಿಮಾನವೂ, ಪೊಪ್ಲಾರ್ ಮರಗಳು, ಹಕ್ಕಿಗಳು ಹಾಗೂ ಮೋಡಗಳಂತೆಯೇ, ಹಿಂದುಳಿಯಿತು.

ಮೇಲೆ ಜಾಜ್ವಲ್ಯಮಾನವಾದ ಸೂರ್ಯನ ಬೆಳಕು. ಈಗ ಈ ಬೆಳಕಿಗೆ ಯಾವುದೂ ಅಡ್ಡಿಬರುತ್ತಿರಲಿಲ್ಲ, ಯಾವುದೂ ಅದರ ಮಾರ್ಗದಲ್ಲಿ ತಡೆಯಾಗಿರಲಿಲ್ಲ. ಯಾಕೆಂದರೆ ಅದು ಬಾಹ್ಯಾಕಾಶದ ಗಡಿಪ್ರದೇಶವಾಗಿದ್ದಿತು. ಸೂರ್ಯನ ಒಂದು ಪಕ್ಕಕ್ಕೆ ಚಂದ್ರನ ಕಾಂತಿಹೀನವಾದ ಹಳದಿ ವೃತ್ತವಷ್ಟೆ ಕಾಣುತ್ತಿದ್ದಿತು. ಗ್ರೀಷ್ಕನ ರಾಕೆಟ್ಟು ಈ ವೃತ್ತದ ಕೇಂದ್ರ ಬಿಂದುವಿನ ಕಡೆಗೆ ಧಾವಿಸಿ ಹೋಗುತ್ತಿದ್ದಿತು.

ಅಂತರಿಕ್ಷ ನೌಕೆ ಭೂಮಿಯಿಂದ ಹೆಚ್ಚು ದೂರ ಸರಿದಂತೆ ಆಕಾಶ ಅಷ್ಟೂ ಹೆಚ್ಚು ಕಪ್ಪಾಗುತ್ತಿತ್ತು. ಕೊನೆಗೆ ಅದು ಸಂಪೂರ್ಣವಾಗಿ ಕಪ್ಪಾಯಿತು – ಹೊಗೆಮಸಿಯಂತೆ ಅಥವಾ ಷೂ ಪಾಲಿಷ್‌ನಂತೆ. ದೂರ ನಕ್ಷತ್ರಗಳು ಕಪ್ಪು ಆಕಾಶದಲ್ಲಿ ಹಿಂದೆಂದೂ ಬೆಳಗದಷ್ಟು ಕಾಂತಿಯೊಂದಿಗೆ ಮಿರುಗುತ್ತಿದ್ದವು. ಗ್ರೀಷ್ಕ ಹಿಂದಿರುಗಿ ನೋಡಿದ. ಅವನ ಹಿಂದೆ ಭೂಮಿ ಹೆಚ್ಚು ಹೆಚ್ಚು ಸಣ್ಣದಾಗುತ್ತಿತ್ತು, ಕಾಂತಿಹೀನವಾದ ನೀಲಿ ಚೆಂಡಿನಂತೆ ಬದಲಿದ್ದಿತು. ಆ ನೀಲಿ ಭೂಮಿಯನ್ನು ಅಷ್ಟು ದೂರದಿಂದ ನೋಡಿದಾಗ ಗ್ರೀಷ್ಕಗೆ ತುಂಬ ದುಃಖವಾಯಿತು. ಆ ಘಳಿಗೆಯಲ್ಲಿ ರಾಕೆಟ್ಟಿನಲ್ಲಿ ಗ್ರೀಷ್ಕನ ಪಕ್ಕದಲ್ಲಿ ಬೇರೆ ಯಾರಾದರೂ ಇದ್ದಿದ್ದರೆ ಗ್ರೀಷ್ಕನ ಆ ವಿಷಣ್ಣ ಮುಖವನ್ನು ಕಂಡು ಖೇದಗೊಳ್ಳುವುದು ಖಂಡಿತವಿದ್ದಿತು.



# ಚಂದ್ರನ ಮೇಲೆ ಗ್ರೀಷ್ಕ ಇಳಿಯುತ್ತಾನೆ

ಗ್ರೀಷ್ಕ ತೆರಪುಗಂಡಿಯ ಗಾಜಿಗೆ ತನ್ನ ಮೂಗನ್ನು ಒತ್ತಿ ಹಿಡಿದು ಕೆಳಗೆ ಚಂದ್ರನ ಕಡೆಗೆ ನೋಡಿದ. ಅಲ್ಲಿ ನದಿಯಾಗಲೀ, ಸರೋವರವಾಗಲೀ ಕಾಡಾಗಲೀ ಒಂದೂ ಇರಲಿಲ್ಲ. ಒಂದು ಮರವೂ ಇರಲಿಲ್ಲ. ಕೇವಲ ಬೂದು ಹಳದಿ ಕಲ್ಲಿನ ಮೈದಾನ, ಈ ಮೈದಾನದ ಮೇಲೆ ಪರ್ವತಗಳು. ಭೂಮಿಯ ಮೇಲೆ ಪರ್ವತಗಳು ಸಾಲುಸಾಲಾಗಿರುತ್ತಿದ್ದವು, ಆದರೆ ಚಂದ್ರನಲ್ಲಿ ಅವು ವರ್ತುಲವಾಗಿದ್ದವು – ರಮ್ಯ ಕಥೆಯೊಂದನ್ನು ಕೇಳಲು ಎಲ್ಲ ಗುಂಡಗೆ ಸುತ್ತು ನಿಂತಿವೆಯೇನೋ ಎಂಬಂತೆ.

ಚಂದ್ರನ ಮೇಲಿನ ಈ ಪರ್ವತಗಳ ದೃಶ್ಯ ಗ್ರೀಷ್ಕನಿಗೆ ಅವನ ಸ್ವಂತ ಅಂಗಳದ ನೆನಪು ತಂದಿತು: ಅಲ್ಲಿ ಹುಡುಗಿಯರು ಹೀಗೆಯೇ ಸುತ್ತ ನಿಂತು ಪರಸ್ಪರ ಪಿಸುಗುಟ್ಟುತ್ತ, ಕಿಲಕಿಲನೆ ನಗುತ್ತ ಅವನನ್ನು ಗೇಲಿ ಮಾಡಿದ್ದರು. ಅಟ್ಟದ ಮೇಲೆ ಕುಳಿತು ಅವನು ಅವರನ್ನೆಲ್ಲ ಚೆನ್ನಾಗಿ ಕಂಡಿದ್ದ. "ಆಗಲಿ, ಆಗಲಿ" ಅವನೆಂದುಕೊಂಡ. "ನಿಮಗೆಲ್ಲ ತೋರಿಸುತ್ತೇನೆ. ನನ್ನನ್ನು ನೀವು ಗೇಲಿ ಮಾಡಿದಿರಿ ಅಲ್ಲವೇ. ತಾಳಿ, ನಾನು ನಿಮಗೆ ತಕ್ಕ ಪಾಠ ಕಲಿಸುತ್ತೇನೆ."

ಗ್ರೀಷ್ಕ ಭಯಂಕರವಾದ ರೀತಿಯಲ್ಲಿ ಸೇಡು ತೀರಿಸಿಕೊಳ್ಳುವ ಯೋಚನೆ ಮಾಡುವುದನ್ನು ತುಂಬ ಇಷ್ಟ ಪಡುತ್ತಿದ್ದ ಅನ್ನುವುದು ನಮಗೆಲ್ಲ ಗೊತ್ತೇ ಇದೆ. ಆದರೆ ಈ ಬಾರಿ ಹಾಗೆಲ್ಲ ಯೋಚನೆ ಮಾಡುತ್ತ ಕುಳಿತಿರಲು ಸಮಯವಿರಲಿಲ್ಲ – ರಾಕೆಟ್ಟು ಆಗಲೇ ಚಂದ್ರನ ಮೇಲೆ ಹೋಗಿ ನಿಂತಿದ್ದಿತು, ಅವನು ರಾಕೆಟ್ಟಿನಿಂದ ಹೊರ ಹೋಗಬೇಕಿತ್ತು. ಅವನು ಚಂದ್ರನ ನೆಲದ ಮೇಲೆ ಕಾಲಿಟ್ಟನೋ ಇಲ್ಲವೋ ತಕ್ಷಣವೇ ಜಾರಿ ಅಂಗತ್ತನಾಗಿ ಬಿದ್ದ. ಬಿದ್ದಿದ್ದರಿಂದ ಅವನಿಗೆ ಎಷ್ಟು ಮಾತ್ರವೂ ನೋವಾಗಲಿಲ್ಲ. ಅಷ್ಟೇ ಅಲ್ಲ, ತಾನು ತುಂಬ ನಿಧಾನವಾಗಿ ಬಿದ್ದನೆಂಬುದನ್ನೂ ಗ್ರೀಷ್ಕ ಗಮನಿಸಿದ. ಒಮ್ಮೆ ಭೂಮಿಯ ಮೇಲೆ ಗ್ರೀಷ್ಕ ಮಂಜಿನ ಕಾಲುದಾರಿಯೊಂದರಲ್ಲಿ ಜಾರಿ ಹೋಗಲು ನೋಡಿದಾಗ ಎಷ್ಟು ಜೋರಾಗಿ ಬಿದ್ದಿದ್ದನೆಂದರೆ ಅವನ ತಲೆ ಸುತ್ತುವಂತಾಗಿತ್ತು. ಆದರೆ ಇಲ್ಲಿ ಚಂದ್ರನ ಮೇಲೆ ಬಿದ್ದಾಗ ಸ್ವಲ್ಪವೂ ನೋವಾಗಲಿಲ್ಲ. ಬದಲು, ಹಿತಕರವಾದ ಭಾವನೆಯೇ ಆಯಿತು.



ಪಾರವೇ ಇರಲಿಲ್ಲ! ಅವನು ಮತ್ತೆ ಸ್ವತಂತ್ರನಾಗಿದ್ದ! ಅವನು ತುಂಬ ಬಲಶಾಲಿಯೂ ಆಗಿದ್ದ! ಇಲ್ಲ, ಖಗೋಳಯಾತ್ರಿ ತನಗೆ ಮೋಸ ಮಾಡಿರಲಿಲ್ಲ. ಅವನು ತನ್ನ ಮಾತನ್ನು ಉಳಿಸಿಕೊಂಡಿದ್ದ.

ಗ್ರೀಷ್ಮ ಚಂದ್ರನ ಮೇಲಿದ್ದ ಆ ಬಂಡೆಯನ್ನು ಉರುಳಾಡಿಸತೊಡಗಿದ. ಅದು ಖಾಲಿ ಪಿಪಾಯಿಯನ್ನು ಉರುಳಿಸುವಷ್ಟು ಸುಲಭವಾಗಿತ್ತು. ಆದರಿಂದ ಅವನಿಗೆ ಸ್ವಲ್ಪವೂ ಸುಸ್ತೂ ಆಗಲಿಲ್ಲ.

ಆ ಹೊತ್ತಿಗೆ ಸರಿಯಾಗಿ ಉಲ್ಕೆಯೊಂದು – ಬಾಹ್ಯಾಕಾಶದಿಂದ ಕೆಳಕ್ಕೆ ಬೀಳುತ್ತಿದ್ದ ಶಿಲೆಯೊಂದು – ಚಂದ್ರನಿಗೆ ಬಂದು ಬಡಿಯಿತು, ಗ್ರೀಷ್ಮನ ಮೂಗಿನ ಮುಂದೆಯೇ ಬಂದು ಬಡಿಯಿತು. ಅದು ಎಷ್ಟು ಬಿರುಸಾಗಿ ಬಂದು ಬಡಿಯಿತೆಂದರೆ ಚಂದ್ರನ ನೆಲ ಕಾದು ಕ್ಷಣದಲ್ಲೇ ನೀರಿನಂತೆ ಕುದಿಯತೊಡಗಿತು. ಅದರಿಂದ ಉಗಿಯ ಪ್ರವಾಹವೂ ಎದ್ದಿತು.

ಅದರಿಂದ ಗ್ರೀಷ್ಮ ದಿಗಿಲುಗೊಂಡ. ಥಟ್ಟನೆ ನಿಂತ. ಆ ಉಲ್ಕಾ ಶಿಲೆ ತನ್ನ ಅಂತರಿಕ್ಷ ಉಡುಪಿಗೇ ಬಂದು ಬಡಿದಿದ್ದರೆ! ಭಾರಿ ತೊಂದರೆಯೇ ಆಗುತ್ತಿತ್ತು! ಅಷ್ಟು ದಿಗಿಲುಗೊಂಡನಂತರ ಸ್ವಲ್ಪ ಸಮಾಧಾನ ಮಾಡಿ ಕೊಳ್ಳುತ್ತಿದ್ದಂತೆಯೇ ತನ್ನ ಶಿರಸ್ತ್ರಾಣಕ್ಕೆ ಏನೋ ಬಂದು ಬಡಿದ ಅನುಭವವಾಯಿತು ಅವನಿಗೆ. ಮಳೆ ಬಂದಾಗ ಕೇಳಿಬರುವಂಥ ಶಬ್ದ ಕೇಳಿಬಂತು. ಹೌದು, ನಿಜಕ್ಕೂ ಮಳೆ ಬೀಳುತ್ತಿದ್ದಿತು – ಚಂದ್ರ ಮಳೆ! ಗ್ರೀಷ್ಮ ಬೊಗಸೆ ಒಡ್ಡಿದ. ಕೂಡಲೇ ಪುಟ್ಟ ಗಾಜಿನ ಹರಳುಗಳು ಅವನ ಬೊಗಸೆ ತುಂಬಿದವು. ಚಂದ್ರನ ಮೇಲ್ಮೈ ಆವರಿಸಿದ್ದಂಥ ಹರಳುಗಳೇ ಆಗಿದ್ದವು ಅವು. "ಓಹೋ, ಹೀಗೇಯೋ ಈ ಚಂದ್ರ ಹರಳುಗಳು ಆಗಿರೋದು" ಎಂದು ಗ್ರೀಷ್ಮ ವಿಚಾರಮಾಡತೊಡಗಿದ. ಭೂಮಿಯ ಮೇಲೆ ನೀರು ಆವಿಯಾಗಿ ಹೋಗುತ್ತೆ. ಮೇಲೆ ಆಕಾಶದಲ್ಲಿ, ತಂಪಾಗಿರುವ ಕಡೆ ಈ ಆವಿ ಮಂಜಿನ ಹರಳುಗಳಾಗಿ ಪರಿವರ್ತನೆಯಾಗುತ್ತೆ. ಆಮೇಲೆ ಆಲಿ ಕಲ್ಲು ಮಳೆ ಬೀಳುತ್ತೆ. ಚಂದ್ರನ ಮೇಲೆ ಕಲ್ಲು ಆವಿಯಾಗುತ್ತೆ. ಆದ್ದರಿಂದಲೇ ಇಲ್ಲಿ ಮಳೆ ನೀರಿನ ಹನಿಗಳ ಬದಲು ಪುಟ್ಟ ಪುಟ್ಟ ಕಲ್ಲುಗಳಿಂದ ಕೂಡಿರುತ್ತೆ. ಭೂಮಿಯ ಮೇಲೆ ಮೋಡಗಳು ಭಾರಿ ಪ್ರಮಾಣದಲ್ಲಿ ರುತ್ತವೆ. ಅವುಗಳಿಂದ ಮಳೆ ಕೆಲವು ವೇಳೆ ವಾರಗಟ್ಟಲೆ ಸುರಿಯುತ್ತೆ. ಆದರೆ ಇಲ್ಲಿ ಚಂದ್ರನ ಮಳೆ ಕೆಲವೇ ಕ್ಷಣಗಳಷ್ಟೆ ಇರುತ್ತೆ.

"ಸರಿ, ಇನ್ನು ಇಲ್ಲಿಂದ ಹೊರಡುವುದು ಲೇಸು" ಎಂದು ಗ್ರೀಷ್ಮ ನಿರ್ಧರಿಸಿದ. "ಯಾರಿಗೆ ಗೊತ್ತು ಇದು ನನ್ನನ್ನು ಕೊಲ್ಲಲೂ ಬಹುದು. ನಾನು ಬಲಶಾಲಿಯಂತೂ ಆದದ್ದಾಯಿತು. ಸಣ್ಣ ಗ್ರಹವೊಂದಕ್ಕೆ ಹೋಗಿ ಇನ್ನಷ್ಟು ಬಲಶಾಲಿಯಾಗುವೆ. ಆಮೇಲೆ ಭೂಮಿಗೆ ಹೋಗೋದು..."

# ಸಣ್ಣ ಗ್ರಹವೊಂದರ ಮೇಲೆ ಗ್ರೀಷ್ಮ

ರಾಕೆಟ್ ನೌಕೆಯು ಗ್ರಹದ ಸಮೀಪ ಹೋದಾಗ ಗ್ರೀಷ್ಮಗೆ ಅತ್ಯಾಶ್ಚರ್ಯವಾಯಿತು: ಎಷ್ಟು ಸಣ್ಣ ಗ್ರಹ – ಕಿ.ಮೀ. ಉದ್ದ, ಅರ್ಧ ಕಿ.ಮೀ. ಅಗಲ. ಅದು ಗುಂಡಗೂ ಇರಲಿಲ್ಲ. ಹೆಚ್ಚಾಗಿ ಸೌತೆಕಾಯಿಯಂತಿತ್ತು. ಇನ್ನೂ ಹೆಚ್ಚು ಆಶ್ಚರ್ಯದ ಸಂಗತಿಯೆಂದರೆ, ಆ ಪುಟ್ಟ ಗ್ರಹದ ಮೇಲೆ ಆಗಲೇ ಒಂದು ರಾಕೆಟ್ ನಿಂತಿತ್ತು. ಯಾರಿದ್ದಾರೋ ಅದರಲ್ಲಿ? ಅದರಿಂದ ತನಗೆ ಸಂತೋಷವಾಗುವುದೋ ದುಃಖವಾಗುವುದೋ ಗ್ರೀಷ್ಮಗೆ ತಿಳಿಯಲಿಲ್ಲ. "ಏನಾದರೂ ಆಗಲಿ, ನೋಡೋಣ" ಅವನು ನಿರ್ಧರಿಸಿದ. ತನ್ನ ರಾಕೆಟ್ಟನ್ನೂ ಅಲ್ಲಿ ನಿಂತಿದ್ದ ರಾಕೆಟ್ ಪಕ್ಕದಲ್ಲೇ ಹೋಗಿ ಇಳಿಸಿದ.

ಅಂತರಿಕ್ಷ ನೌಕೆಯಿಂದ ಹೊರ ಬಂದು ಮೆಟ್ಟಲು ಇಳಿಯತೊಡಗಿದ. ಇಳಿಯುತ್ತಲೇ ಪಕ್ಕಕ್ಕೆ ತಿರುಗಿ ನೋಡಿದ. ಆ ಇನ್ನೊಂದು ರಾಕೆಟ್ಟಿನ ಪಕ್ಕದಲ್ಲಿ ಯಾರೋ ಒಬ್ಬ ನಿಂತಿದ್ದ. ಅವನು ಅಂತರಿಕ್ಷ ಉಡುಪು ತೊಟ್ಟಿದ್ದ, ಕೈಯಲ್ಲಿ ಹಗ್ಗದ ಸಿಂಬಿ ಹಿಡಿದಿದ್ದ. "ಹಗ್ಗ ಯಾತಕ್ಕೆ ಬೇಕು ಇವನಿಗೆ?" ಗ್ರೀಷ್ಮ ಕಾತುರದಿಂದ ಆಶ್ಚರ್ಯ ಪಟ್ಟ. "ಇಲ್ಲೇನೋ ನನಗೆ ಇಷ್ಟವಾಗದುದು ಇದ್ದಂತಿದೆ."

ಗ್ರೀಷ್ಮ ಏಣಿಯ ಕೊನೆಯ ಮೆಟ್ಟಲಿನಿಂದ ಗ್ರಹದ ಮೇಲಕ್ಕೆ ಎಗರಿದ. ಅವನ ಪಾದ ಗ್ರಹದ ಮೇಲ್ಮೈ ತಲುಪಿತೋ ಇಲ್ಲವೋ ಅವನು ಮೇಲಕ್ಕೆ ಪುಟ ನೆಗೆದ. ಅವನ ದೇಹದ ತುಂಬ ಗಾಳಿ ತುಂಬಿದ್ದಿತೇನೋ ಎಂಬಂತೆ ಹಾರಾಡತೊಡಗಿದ. ಆ ಹೊತ್ತಿಗೆ ಸರಿಯಾಗಿ ಅಲ್ಲಿದ್ದ ಆ ಅಪರಿಚಿತ ವ್ಯಕ್ತಿ ತನ್ನ ತೋಳನ್ನು ಬೀಸಿ ಗ್ರೀಷ್ಮನ ಕಾಲಿಗೆ ಹಗ್ಗದ ಕುಣಿಕೆ ಬೀಳುವಂತೆ ಮಾಡಿ ಗಂಟು ಬಿಗಿದ. ಗ್ರೀಷ್ಮ ಗ್ರಹದ ಮೇಲೆ ಅಂತರಿಕ್ಷದಲ್ಲಿ ತೂಗಿ ಬಿದ್ದಿದ್ದಾಗ ಆ ಅಪರಿಚಿತ ವ್ಯಕ್ತಿ ಹಗ್ಗದ ಇನ್ನೊಂದು ತುದಿಯನ್ನು ಗ್ರೀಷ್ಮನ ರಾಕೆಟ್ಟಿಗೆ ಕಟ್ಟಿದ, ಆಮೇಲೆ ಅವನನ್ನು ಕೆಳಕ್ಕೆ ಎಳೆದ. ಕೊನೆಗೂ ಗ್ರಹದ ಮೇಲೆ ನಿಲ್ಲುವಂತಾಗಿ ಗ್ರೀಷ್ಮ ಆ ಅಪರಿಚಿತ ವ್ಯಕ್ತಿಯ ಶಿರಸ್ತ್ರಾಣದ ಮೂಲಕ ಅವನ ಮುಖವನ್ನು ನೋಡಿದ. ಅಲ್ಲಿ ಅವನು ಯಾರನ್ನು ಕಂಡದ್ದು ? – ಎಲ್ಲಾ ಬಿಟ್ಟು ವಾನ್ಯ ನನ್ನು !

ಗ್ರೀಷ್ಮ ಯಾವುದಕ್ಕೂ ಸಿದ್ಧವಾಗಿದ್ದ, ಆದರೆ ಇದಕ್ಕಂತೂ ಸಿದ್ಧವಾಗಿರಲಿಲ್ಲ ! ಭೂಮಿಯ ಮೇಲೆ ತನಗೆ ಕಾಟ ಕೊಟ್ಟದ್ದು ಸಾಲದು ಅಂತ ಈ ಸೋಗಿನ ಸೌಜನ್ಯದ ವಾನ್ಯ ಇಲ್ಲಿಗೂ ಬರಬೇಕೆ ! ಅದೂ ಸಾಲದೂಂತ ತನ್ನ ಕಾಲಿಗೆ ಹಗ್ಗ ಹಾಕಿ ಹಿಡಿಯಬೇಕೆ ! ಉಹೂಂ, ಇದಂತೂ ಗ್ರೀಷ್ಮಗೆ ನುಂಗಲಾಗದ ತುತ್ತು. ಅವನು ವಾನ್ಯನ ಬಳಿಗೆ ಹೋಗಿ ಎದೆಯ ಮೇಲೆ ಗುದ್ದು ಕೊಟ್ಟ. ಆ ಕ್ಷಣವೇ ವಾನ್ಯನೂ ಗ್ರೀಷ್ಮನೂ ಇಬ್ಬರೂ ರಬ್ಬರ್ ಚೆಂಡುಗಳಂತೆ ಒಬ್ಬರಿಂದೊಬ್ಬರು ದೂರ ಹಿಂದಕ್ಕೆ ಚಿಮ್ಮಿದರು. ಲಾಗ ಹಾಕಿದ ಮೇಲೆ ಇಬ್ಬರೂ ಮೇಲೆ ತೇಲತೊಡಗಿದರು. ವಾನ್ಯನೂ ತನ್ನನ್ನು ಹಗ್ಗದಿಂದ ತನ್ನ ರಾಕೆಟ್ಟಿಗೆ ಕಟ್ಟಿಕೊಂಡಿದ್ದ. ಹೀಗೆ ಇಬ್ಬರು ಬಾಲಕರೂ ತಮ್ಮ ಹಗ್ಗಗಳ ತುದಿಗಳಲ್ಲಿ ಬಲೂನ್‌ಗಳಂತೆ ಮೇಲೆ ಉರುಳಾಡುತ್ತಿದ್ದರು.

"ನೀನು ಎಂಥ ಹೆಡ್ಡ" ಅಂತ ವಾನ್ಯ ಹೇಳಿದುದನ್ನು ಗ್ರೀಷ್ಮ ತನ್ನ ಕರ್ಣವಾಣಿಯ ಮೂಲಕ ಕೇಳಿಸಿಕೊಂಡ. "ಖಗೋಳಯಾತ್ರಿ ನನ್ನನ್ನು ಇಲ್ಲಿಗೆ ಕಳುಹಿಸಿದರು. ಮೊದಲು ರಾಕೆಟ್ಟಿಗೆ ನಿನ್ನನ್ನು ಹಗ್ಗದಿಂದ ಕಟ್ಟಿಕೊಳ್ಳದೆಯೇ ಗ್ರಹದ ಮೇಲೆ ಇಳಿಯಕೂಡದೆಂದು ನಿನಗೆ ಹೇಳಲು ಅವರು ಮರೆತು ಬಿಟ್ಟರು. ನೀನು ಚಂದ್ರನಲ್ಲಿದ್ದಾಗ ನಾನು ಇಲ್ಲಿಗೆ ನೇರವಾಗಿ ಯಾನ ಮಾಡಿಕೊಂಡು ಬಂದೆ. ನಾನು ನಿನ್ನನ್ನು ಹಗ್ಗದ ಕುಣಿಕೆ ಹಾಕಿ ಹಿಡಿಯದೆ ಹೋಗಿದ್ದರೆ ನೀನೂ ಉಲ್ಕಾಶಿಲೆಯಂತೆ ಬಾಹ್ಯಾಕಾಶದಲ್ಲಿ ಹಾರುತ್ತ ಇರುತ್ತಿದ್ದೆ. ಭೂಮಿಯ ಮೇಲೆ ನಿನಗೆ ಸಹಜವಾಗಿ ನಡೆದಾಡುವುದು ಅಭ್ಯಾಸವಾಗಿರುತ್ತೆ – ಭೂಮಿ ದೊಡ್ಡದು ಮತ್ತು ಅದರ

ಗುರುತ್ವಾಕರ್ಷಣ ಶಕ್ತಿ ಭಾರಿಯಾಗಿರುತ್ತೆ. ಆದರೆ ಈ ಕ್ಷುದ್ರಗ್ರಹ ಎಷ್ಟು ಸಣ್ಣದೆಂದರೆ ಇದು ತನ್ನಲ್ಲಿರುವ ವಸ್ತುಗಳನ್ನು ಅವುಗಳ ಸ್ಥಳಗಳಲ್ಲಿ ಹಿಡಿದು ಇರಿಸಲಾರದು. ಇಲ್ಲಿ ಪ್ರತಿಯೊಂದೂ ಬಹುಮಟ್ಟಿಗೆ ತೂಕರಹಿತವಾಗಿದೆ. ತಿಳಿಯಿತೆ?! ನೀನು ಅದನ್ನು ಚಂದ್ರನಲ್ಲಿದ್ದಾಗಲೇ ವಿಚಾರ ಮಾಡಿ ತಿಳಿದಿರಬೇಕಿತ್ತು. ಈಗ ನನ್ನನ್ನು ಗಮನಿಸು. ನಾನು ಮಾಡಿದ ಹಾಗೆ ಮಾಡು."

ವಾಸ್ಯ ಹಗ್ಗವನ್ನು ತನ್ನ ಕೈಗಳಲ್ಲಿ ಸುತ್ತಿಕೊಳ್ಳತೊಡಗಿದ. ಹಾಗೆ ಮಾಡುತ್ತ ಅವನು ಗ್ರಹದ ಮೇಲ್ಮೈ ಸಮೀಪ ಬಂದ. ಅಲ್ಲಿ ಕಲ್ಲುಗಳ ನಡುವೆ ಒಂದು ಸಣ್ಣ ಬಿರುಕನ್ನು ಕಂಡುಕೊಂಡು ಅದರೊಳಗೆ ತನ್ನ ಪಾದವನ್ನು ತೂರಿಸಿ, ಮತ್ತೆ ಮೇಲಕ್ಕೆ ಹಾರಿ ಹೋಗದಂತೆ ಮಾಡಿಕೊಂಡ.

ಗ್ರೀಷ್ಕ ಇನ್ನೂ ಆ ಗ್ರಹದ ಮೇಲೆಯೇ ಹಾರಾಡುತ್ತಿದ್ದ. ತನ್ನ ಜೀವನದಲ್ಲಿ ಅದೇ ಮೊದಲ ಬಾರಿಗೆ ಅವನಿಗೆ ನಾಚಿಕೆಯಾಯಿತು. ಇಲ್ಲಿ ಈ ವಾಸ್ಯ ತನ್ನ ಜೀವನವನ್ನು ಉಳಿಸಲು ಧಾವಿಸಿ ಬಂದಿದ್ದ, ಆದರೆ ಅದೇ ತಾನು ಗ್ರೀಷ್ಕ ಅವನನ್ನು ಹೊಡೆಯ ಬಯಸಿದ್ದನಲ್ಲ. ಇದು ನಿಜಕ್ಕೂ ಕೆಟ್ಟುದೇ, ಅಲ್ಲವೇ?

ಹಾಗೆ ವಿಚಾರ ಮಾಡುತ್ತ ಆ ಸಣ್ಣ ಗ್ರಹದ ಮೇಲೆ ಲಾಗ ಹಾಕಿಕೊಂಡು ಸುತ್ತುತ್ತ, ತನ್ನನ್ನೇ ಚೆನ್ನಾಗಿ ಬಯ್ದುಕೊಂಡ. ಸುತ್ತ ಎಲ್ಲ ಅಂತರಿಕ್ಷದ ಗಾಢಾಂಧಕಾರ ತುಂಬಿತ್ತು. ಅದರಲ್ಲಿ ಕೋಟ್ಯಾಂತರ ಬೆಳ್ಳಿ ನಕ್ಷತ್ರಗಳು ಹರಡಿ ಹಂಚಿದ್ದವು. ಆ ಕಪ್ಪು ಹಿನ್ನೆಲೆಯಲ್ಲಿ ಸೂರ್ಯನ ಬಿಂಬವೂ ಉಜ್ವಲವಾಗಿ ಬೆಳಗುತ್ತಿದ್ದಿತು. ಚಂದ್ರನ ಬಿಂಬ ಹಳದಿ ಕಾಂತಿಯಿಂದ ಕೂಡಿದ್ದಿತು. ಭೂಮಿಯ ಬಿಂಬ ನೀಲಿ ಬಣ್ಣದಿಂದ ಹೊಳೆಯುತ್ತಿತ್ತು.

"ಹೇಯ್, ನಿದ್ದೆ ಹೋಗಿ ಬಿಟ್ಟೆಯಾ ಹೇಗೆ?" ಗ್ರೀಷ್ಕನಿಗೆ ಸುಪರಿಚಿತ ಧ್ವನಿ ಕೇಳಿಬಂದಿತು. "ಕೆಳಗಿಳಿದು ಬಾ. ವಾಲೀಬಾಲ್ ಆಡೋಣ."

ಗ್ರೀಷ್ಕ ಗ್ರಹದ ಮೇಲ್ಮೈ ವರೆಗೂ ತನ್ನನ್ನು ಕೆಳಗಿಳಿಸಿಕೊಂಡು ಅಲ್ಲಿ ಪಾದವಿರಿಸಲು ಒಂದು ಬಿರುಕನ್ನು ಕಂಡುಕೊಂಡು, ಆಡಲು ಅಣಿಯಾಗಿ ನಿಂತ. ನಿಜ, ಅಲ್ಲಿ ವಾಲೀಬಾಲ್ ಆಡುವುದು ಹೇಗೆ ಸಾಧ್ಯ ಅನ್ನುವುದನ್ನು ಅವನು ಊಹಿಸಿಕೊಳ್ಳದಾಗಿದ್ದ. ಅಲ್ಲದೆ ಅಲ್ಲಿ ಚೆಂಡೂ ಇರಲಿಲ್ಲ.

ಈ ಮಧ್ಯೆ ವಾಸ್ಯ ಒಂದು ಅಲಮಾರುವಿನಷ್ಟು ದೊಡ್ಡದಾದ ಬಂಡೆಯೊಂದರ ಕೆಳಗೆ ತೆವಳಿಕೊಂಡು ಹೋಗಿ ಅದನ್ನು ಪಿಕಾಸಿಯಿಂದ ಎತ್ತೆಸೆಯುವಂತೆ ಎಸೆದ. ಗಿರಕಿ ಹೊಡೆಯುತ್ತ ತುಂಬ ನಿಧಾನವಾಗಿ ತನ ಗಿಷ್ಟವಿಲ್ಲವೇನೋ ಎಂಬಂತೆ ಆ ಬಂಡೆ ಗ್ರೀಷ್ಕನ ಕಡೆಗೆ ತೇಲಿಕೊಂಡು ಹೋಯಿತು.

"ಭೂಮಿಯ ಮೇಲೆ ಹತ್ತು ಟನ್ ತೂಗುವುದು ಇಲ್ಲಿ ಒಂದು ಕಿ.ಗ್ರಾಂ. ಅಷ್ಟೆ ತೂಗುತ್ತೆ. ಆದ್ದರಿಂದ ನೀನೇನೂ ಹೆದರಬೇಕಾದ್ದಿಲ್ಲ" ವಾಸ್ಯ ರೇಡಿಯೋ ಮೂಲಕ ಕೂಗಿ ಹೇಳಿದ.

ಗ್ರೀಷ್ಕ ತನ್ನ ಕೈ ಬೆರಳುಗಳನ್ನು ವಿಶಾಲವಾಗಿ ಹರಡಿಕೊಂಡು ಧೈರ್ಯದಿಂದ ಆ ಬಂಡೆಯನ್ನು ಚೆಂಡಿನಂತೆ ತಳ್ಳಿ ವಾಸ್ಯನ ಕಡೆಗೆ ಕಳುಹಿಸಿಕೊಟ್ಟ. ಅವರ ಆಟ ನೋಡಲು ನಿಜಕ್ಕೂ ಮೋಜಿನದಾಗಿತ್ತು!

ಆಮೇಲೆ ವಾಸ್ಯ ಆ ಬಂಡೆಯನ್ನು ಕಾಲ್ಚೆಂಡಿನ ಆಟಗಾರನಂತೆ ಕಾಲಿನಿಂದ ಒದ್ದ. ಅದು ಉರುಳಿಕೊಂಡು ಬಾಹ್ಯಾಕಾಶಕ್ಕೆ ಹೋಯಿತು, ತನ್ನ ಬಾಹ್ಯಾಕಾಶ ಪ್ರವಾಸ ಪ್ರಾರಂಭಿಸಿತು. ಅದರ ಪ್ರಯಾಣ ಮಾರ್ಗ ಸೂರ್ಯ, ಭೂಮಿ, ಚಂದ್ರ ಮತ್ತೆ ಎಷ್ಟೋ ಸಣ್ಣ ಪುಟ್ಟ ಗ್ರಹಗಳನ್ನೆಲ್ಲ ದಾಟಿಕೊಂಡು ಹೋಗಬಲ್ಲುದಿದ್ದಿತು. ಅದೊಂದು ಉಲ್ಕಾಶಿಲೆಯಾಗಿ ಆಗಿದ್ದಿತು. ಎಂದಾದರೊಂದು ದಿನ ಅದರ ಪಥ ಭೂಮಿಯ ಪಥಕ್ಕೆ ಅಡ್ಡ ಬರಬಹುದಿದ್ದಿತು. ಅದು ರಾತ್ರಿ ವೇಳೆಯಲ್ಲಿ ಜರುಗಿದರೆ, ಜನ ಆಗಸದಲ್ಲಿ ಬೆಂಕಿಯ ಗೆರೆಯೊಂದನ್ನು ಕಾಣಲಿರುವರು. ಅದು ಬೆಳ್ಗಾವಿನಿಂದ ಉರಿಯುತ್ತಿದ್ದ ಆ ಬಂಡೆಯ ಬೆಳಕಿನ ಬಾಲವಾಗಿರುತ್ತೆ. ಬಂಡೆ ಭೂಮಿಯ ವಾತಾವರಣವನ್ನು ಪ್ರವೇಶಿಸಿ ಸುಟ್ಟು ಬೂದಿಯಾಗಲಿದ್ದಿತು.



ಬಾಲಕರು ಇಂತಹ ಉಲ್ಕಾಶಿಲೆಗಳನ್ನು ಮಾಡುವುದನ್ನು ತುಂಬ ಇಷ್ಟಪಟ್ಟರು. ಅವರು ಕಲ್ಲುಗಳನ್ನು ಒಂದಾದ ಮೇಲೊಂದರಂತೆ ಎಸೆಯತೊಡಗಿದರು. ಕೊನೆಗೆ ಇಬ್ಬರೂ ಒಟ್ಟಿಗೆ ಸೇರಿ ಒಂದು ಬಸ್ಸಿನಷ್ಟು ದೊಡ್ಡದಾದ ಬಂಡೆಯನ್ನು ಬಾಹ್ಯಾಕಾಶದಲ್ಲಿ ತೇಲಿಕೊಂಡು ಹೋಗುವಂತೆ ಉರುಳಿಸಿದರು.

# ಮರಳಿ ಮನೆಗೆ!

ಎರಡು ರಾಕೆಟ್ಟುಗಳೂ ಆ ಸಣ್ಣ ಗ್ರಹದಿಂದ ಒಂದೇ ಕಾಲಕ್ಕೆ ಭೂಮಿಗೆ ಅಭಿಮುಖವಾಗಿ ಹಾರಿ ಹೊರಟವು. ಅವು ಪಕ್ಕಪಕ್ಕದಲ್ಲೇ ಹಾರಿಕೊಂಡು ಹೋದವು. ಯಾವುದೊಂದೂ ಇನ್ನೊಂದನ್ನು ಹಿಂದೆ ಹಾಕಲು ಅಥವಾ ಮುಂದೆ ಹೋಗಲು ಯತ್ನಿಸಲಿಲ್ಲ. ಭೂಮಿಯ ಮೇಲೆ ಯಾವುದಾದರೂ ಹುಲ್ಲುಗಾವಲಿನ ಹಾದಿಯಲ್ಲಿ ಅಥವಾ ನಗರದ ಬೀದಿಯಲ್ಲಿ ನಡೆದು ಹೋಗುವ ಇಬ್ಬರು ಮಿತ್ರರಂತೆ ಅವೆರಡೂ ಜೊತೆಜೊತೆಯಾಗಿ ಹಾರಿಹೋದವು.

ಅರ್ಧ ದಾರಿ ಹೋದಾಗ ಖಗೋಳಯಾತ್ರಿ ಈ ರಾಕೆಟ್ಟುಗಳೊಂದಿಗೆ ರೇಡಿಯೋ ಸಂಪರ್ಕ ಸ್ಥಾಪಿಸಿಕೊಂಡ. ಯಾನ ಹೇಗೆ ಸಾಗಿದ್ದಿತು, ಅವರು ಹೇಗೆ ಚಂದ್ರನ ಮೇಲೂ ಸಣ್ಣ ಗ್ರಹದ ಮೇಲೂ ಇಳಿದಿದ್ದರು, ಎಂಬೆಲ್ಲವುಗಳ ಬಗೆಗೂ ಅವರ ವರದಿ ಕೇಳಿದನಂತರ ಖಗೋಳಯಾತ್ರಿ ಬಾಲಕರನ್ನು ಇನ್ನೇನಾದರೂ ಪ್ರಶ್ನೆಗಳಿವೆಯೇ ಎಂದು ಕೇಳಿದ. ಗ್ರೀಷ್ಕಗೆ ಕೇಳಬೇಕಾದ ಒಂದು ಪ್ರಶ್ನೆ ಇದ್ದಿತು.

"ಆ ಸಣ್ಣ ಗ್ರಹದ ಮೇಲಿದ್ದಷ್ಟೆ ಬಲಶಾಲಿಯಾಗಿ ನಾನು ಭೂಮಿಯ ಮೇಲೆಯೂ ಇರುವೆನೆ?" ಅವನು ಕೇಳಿದ.

"ಇಲ್ಲ" ಖಗೋಳಯಾತ್ರಿ ಉತ್ತರಿಸಿದ. "ಭೂಮಿಯ ಮೇಲೆ ನೀನು ಹಿಂದೆ ಎಷ್ಟು ಬಲಶಾಲಿಯಾಗಿದ್ದೆಯೋ ಅಷ್ಟೇ ಬಲಶಾಲಿಯಾಗಿರುವೆ. ಸಹಜವಾದ ಜೀವನ ನಡೆಸಲು ನೀನು ಅದಕ್ಕೂ ಹೆಚ್ಚು ಬಲಶಾಲಿಯಾಗಿರುವ ಆವಶ್ಯಕತೆ ಏನಿಲ್ಲ. ಈಗ ನಿನಗೇ ಗೊತ್ತಾಯಿತಲ್ಲ – ನಿನಗೆ ಆವಶ್ಯಕತೆಗೂ ಮೀರಿ ಶಕ್ತಿ ಇದ್ದರೆ ತುಂಬ ಹಾನಿ, ಕೇಡು ಉಂಟುಮಾಡಬಹುದು, ಅಂತ. ನೀನೂ ವಾನ್ಯನೂ ಸೇರಿ ಆ ಇಡೀ ಸಣ್ಣ ಗ್ರಹವನ್ನು ಉಲ್ಕಾಶಿಲೆಗಳಾಗಿ ಒಡೆದು ಮುಗಿಸಿ ಬಿಡಬಹುದಿತ್ತು. ನೀವು ಒಂದು ಇಡೀ ಗ್ರಹವನ್ನೇ, ಅದು ಎಷ್ಟೇ ಸಣ್ಣದಾಗಿ ನಿರ್ಜನವಾಗಿದ್ದರೂ, ನಾಶ ಮಾಡಿಬಿಡಬಹುದಿತ್ತು."

"ನಿಮ್ಮ ಬುದ್ಧಿವಾದಕ್ಕೆ ವಂದನೆಗಳು." ಗ್ರೀಷ್ಕ ಖಗೋಳಯಾತ್ರಿಗೆ ಹೇಳಿದ. ಭೂಮಿಗೆ ಹಿಂದಿರುಗಿದಾಗ ಗ್ರೀಷ್ಕ ಹಿಂದೆ ಎಂದೂ ಇದ್ದುದಕ್ಕಿಂತ ಹೆಚ್ಚು ಬಲಶಾಲಿಯಾಗೇನೂ ಇರಲಿಲ್ಲ, ಆದರೆ ಈಗವನು ಹೆಚ್ಚು ವಿವೇಕಶಾಲಿಯಾಗಿದ್ದ.



